


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 23-03-2021 ಪ್ರಶ್ನೆ ಸಂಖ್ಯೆ : 262(1943)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ವಿಜಯ ಸಿಂಗ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 23-03-2021

ಉತ್ತರಿಸುವ ಸಚಿವರು: ಗಣಿ ಮತ್ತು ಭೂ ವಿಜ್ಞಾನ ಸಚಿವರು

ವಿಷಯ : ಬೀದರ್ ಜಿಲ್ಲೆಯಲ್ಲಿನ ಅಕ್ರಮ ಗಣಿಗಾರಿಕೆಯ ಬಗ್ಗೆ

(ಅ) ಬೀದರ್ ಜಿಲ್ಲೆಯಲ್ಲಿ ಅಕ್ರಮವಾಗಿ ಗಣಿಗಾರಿಕೆ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಅಕ್ರಮ ತಡೆಯಲು ತೆಗೆದುಕೊಂಡ ಕ್ರಮಗಳೇನು;

(ಆ) ಬೀದರ್ ತಾಲ್ಲೂಕಿನ ಸುಲ್ತಾನಪುರ ಬಳಿ ಗಣಿಗಾರಿಕೆ ನಡೆಯುವ ಸ್ಥಳದಲ್ಲಿ 16 ಕ್ವಿಂಟಲ್ ಜೆಲೆಟಿನ್ ಅಕ್ರಮವಾಗಿ ಪತ್ತೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಗಣಿಗಾರಿಕೆಯ ಮಾಲೀಕರ ವಿರುದ್ದ ಕೈಗೊಂಡ ಕ್ರಮಗಳೇನು; ಯಾವುದೇ ಕ್ರಮ ಕೈಗೊಳ್ಳದಿದ್ದರೆ, ಅದಕ್ಕೆ ಕಾರಣಗಳೇನು? (ವಿವರ ನೀಡುವುದು)